ಪ್ರತಿ ಕಣ್ಣು ಸಂಪೂರ್ಣ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳೆಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆ ಎಂದು ಪರಿಗಣಿಸಲಾಗುವುದು.

**6.7 ಶ್ರವಣಶಕ್ತಿ**

ಅಭ್ಯರ್ಥಿಗಳ ಶ್ರವಣ ಶಕ್ತಿಯನ್ನು ಪರೀಕ್ಷಿಸಲು ಈ ಕೆಳಕಂಡ ಪರೀಕ್ಷೆಗಳನ್ನು ನಡೆಸಲಾಗುವುದು.

1. ರಿನ್ನರ್ಸ್ ಟೆಸ್ಟ್
2. ವೆಬ್ಬರ್ಸ್ ಟೆಸ್ಟ್
3. ಟೆಸ್ಟ್ ಫಾರ್ ವರ್ಟಿಗೋ

ಮೇಲಿನ ಪರೀಕ್ಷೆಗಳಲ್ಲಿ ಯಾವುದಾದರೂ ಶ್ರವಣ ದೋಷವಿದೆಯೆಂದು ಕಂಡುಬಂದಲ್ಲಿ ಅಂತಹ ಅಭ್ಯರ್ಥಿಗಳು ಆಯ್ಕೆಗೆ ಅನರ್ಹರಾಗುತ್ತಾರೆ.

**ಈ ಎಲ್ಲಾ ಹಂತದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದ ಅಭ್ಯರ್ಥಿಗಳು ಮಾತ್ರ ಮುಂದಿನ ಹಂತದ ಲಿಖಿತ ಪರೀಕ್ಷೆಗೆ ಹಾಜರಾಗಲು ಅರ್ಹತೆ ಪಡೆಯುತ್ತಾರೆ.**

**7.1 ಲಿಖಿತ ಪರೀಕ್ಷೆ:**

ಲಿಖಿತ ಪರೀಕ್ಷೆಯ ಪ್ರಶ್ನೆ ಪತ್ರಿಕೆಯುನೂರು (100) ಅಂಕಗಳದ್ದಾಗಿದ್ದು, 2 ಗಂಟೆಯ ಅವಧಿಯಲ್ಲಿ ಉತ್ತರಿಸಬೇಕಾಗಿದೆ. ಪ್ರಶ್ನೆ ಪತ್ರಿಕೆಯು ಬಹು ಆಯ್ಕೆ (objective multiple choice) ಮಾದರಿಯದಾಗಿದ್ದು, ಇದು ಪ್ರಾಥಮಿಕ ಸಾಮಾನ್ಯ ಜ್ಞಾನ ಹಾಗೂ ಪ್ರಾಥಮಿಕ ಅಂಕಗಣಿತ ವಿಷಯವನ್ನು ಒಳಗೊಂಡಿರುತ್ತದೆ.

**7.2 ವಿಶೇಷ ಸೂಚನೆಗಳು:–**

**(1) ಅರಣ್ಯ ವೀಕ್ಷಕ ಹುದ್ದೆಯ ನೇರ ನೇಮಕಾತಿಗಾಗಿ ಅಧಿಸೂಚನೆ ಹೊರಡಿಸಿರುವ ಎಲ್ಲಾ ವೃತ್ತಗಳಲ್ಲಿ ಒಂದೇ ದಿನಾಂಕ ಮತ್ತು ಒಂದೇ ಸಮಯದಲ್ಲಿ ನೇಮಕಾತಿಗೆ ಸಂಬಂಧಿಸಿದ ಎಲ್ಲಾ ಪರೀಕ್ಷೆಗಳನ್ನು ನಡೆಸಲಾಗುವುದು. ಆದ್ದರಿಂದ ಅಭ್ಯರ್ಥಿಗಳು ಯಾವುದಾದರೂ ಒಂದೇ ವೃತ್ತಕ್ಕೆ ಸಂಬಂಧಿಸಿದ ಅರಣ್ಯ ವೀಕ್ಷಕ ಹುದ್ದೆಗೆ ಅರ್ಜಿ ಸಲ್ಲಿಸುವುದು ಒಳಿತು.**

**(2)** ಅಭ್ಯರ್ಥಿಗಳು ನೇಮಕಾತಿಯ ಎಲ್ಲಾ ಪರೀಕ್ಷೆಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು ಹಾಗೂ ಈ ಎಲ್ಲಾ ಪರೀಕ್ಷೆಗಳು ಒಂದಕ್ಕಿಂತ ಹೆಚ್ಚಿನ ದಿನ ನಡೆಯುವುದರಿಂದ ಈ ಬಗ್ಗೆ ಎಲ್ಲಾ ಪೂರ್ವಸಿದ್ಧತೆ ಹಾಗೂ ತಂಗುವಿಕೆ ಬಗ್ಗೆ ಸ್ವಂತ ಖರ್ಚಿನಲ್ಲಿ ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.

**7.3** 7ನೇ ತರಗತಿ ಹಾಗೂ ಅದಕ್ಕಿಂತ ಮೇಲ್ಪಟ್ಟ ವಿದ್ಯಾಭ್ಯಾಸದಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯನ್ನಾಗಿ ಅಭ್ಯಸಿಸದೇ ಇರುವ ಅಭ್ಯರ್ಥಿಗಳಿಗೆ ಕರ್ನಾಟಕ ಸಿವಿಲ್ ಸೇವೆಗಳು (ನೇಮಕಾತಿ) (ಕನ್ನಡ ಭಾಷಾ ಪರೀಕ್ಷೆ) ನಿಯಮಗಳು, 1984ಕ್ಕೆ ಪೂರಕವಾಗಿ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 69 ಎಸ್‌ಸಿಆರ್ 84 ದಿನಾಂಕ 23–9–1985ರಲ್ಲಿ ಸೂಚಿಸಿದ ಪ್ರಕಾರ ಅಂತಹ ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನವನ್ನು ಪರೀಕ್ಷಿಸಲು ನಿಗದಿಪಡಿಸಿದ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರವೇ ಅಭ್ಯರ್ಥಿಗಳು ನೇಮಕಾತಿ ಹೊಂದಲು ಅರ್ಹರಾಗುತ್ತಾರೆ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಅಭ್ಯರ್ಥಿಗಳನ್ನು ಮುಂದಿನ ಆಯ್ಕೆ ಪ್ರಕ್ರಿಯೆಯಿಂದ ಕೈಬಿಡಲಾಗುವುದು.

**7.4 ಕನ್ನಡ ಭಾಷಾ ಪರೀಕ್ಷೆಯ ಪಠ್ಯಕ್ರಮ**

**7.5** ಕನ್ನಡ ಭಾಷಾ ಪರೀಕ್ಷೆಯನ್ನು ಎರಡು ಹಂತದಲ್ಲಿ ನಡೆಸಲಾಗುತ್ತದೆ. ಇದರ ವಿವರ ಕೆಳಗೆ ನಮೂದಿಸಿದೆ.

ಸಮಯ: 1.00 ಗಂಟೆ

| | | |
|---|---|---|
| ಮೊದಲನೇ ಹಂತ–ಲಿಖಿತ ಪರೀಕ್ಷೆ: | ಲಿಖಿತ ಪರೀಕ್ಷೆಗೆ ಕನ್ನಡ ಶಾಲಾ ನಾಲ್ಕನೇ ತರಗತಿಯ ಕನ್ನಡ ಮುಖ್ಯ ಪಠ್ಯಪುಸ್ತಕ ಹಾಗೂ ವಿವಿಧ ಲೇಖಕರು ಬರೆದ ಕರ್ನಾಟಕ ವಯಸ್ಕರ ಶಿಕ್ಷಣ ಪರಿಷತ್ತು ಪ್ರಕಟಿಸಿರುವ "ಸತ್ಯಕ್ಕೆ ಬೆಲೆ ಕೊಟ್ಟ ಗೆಳೆಯರು" ಎಂಬ ಪಾಠದಿಂದ ಆರಂಭವಾಗುವ ಸಣ್ಣ ಕಥೆಗಳು ಇವುಗಳಿಂದ ಪ್ರಶ್ನೆಗಳನ್ನು ಕೊಡಲಾಗುವುದು. | 90 ಅಂಕಗಳು |
| ಎರಡನೇ ಹಂತ–ಮೌಖಿಕ ಪರೀಕ್ಷೆ: | ಅ) ಮುದ್ರಿತ ಹಾಗೂ ಹಸ್ತ ಪ್ರತಿಗಳನ್ನು ಓದುವುದು.<br>ಆ) ಅರ್ಜಿಗಳನ್ನು ಓದಿ ವಿವರಿಸುವುದು.<br>ಇ) ಸಂಭಾಷಣೆ ನಡೆಸುವುದು. | 10 ಅಂಕಗಳು |

**7.6** ಈ ಕೆಳಗಿನ ಮಟ್ಟದಲ್ಲಿ ಮೂರು ವಿಧದಲ್ಲಿ ಕನಿಷ್ಠ ಅಂಕಗಳನ್ನು ಪಡೆದವರು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರುವರೆಂದು ಪರಿಗಣಿಸಲಾಗುವುದು.

(ಅ) ಲಿಖಿತ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: 30

(ಆ) ಮೌಖಿಕ ಪರೀಕ್ಷೆಯಲ್ಲಿ ಪಡೆಯತಕ್ಕ ಕನಿಷ್ಠ ಅಂಕಗಳು: 3

(ಇ) ಲಿಖಿತ ಪರೀಕ್ಷೆಯಲ್ಲಿ ಮತ್ತು ಮೌಖಿಕ ಪರೀಕ್ಷೆಯಲ್ಲಿ ಒಟ್ಟಿಗೆ ಪಡೆಯತಕ್ಕ ಕನಿಷ್ಠ ಅಂಕಗಳು: 35

**8.** ಅಭ್ಯರ್ಥಿಗಳು ಲಿಖಿತ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಲ್ಲಿ ಹಾಗೂ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮ, ಮೀಸಲಾತಿ ನಿಯಮಗಳ ಪ್ರಕಾರ ಪರಿಗಣಿಸಿ ಅಂತಿಮ ಆಯ್ಕೆ ಪಟ್ಟಿಯನ್ನು ತಯಾರಿಸಲಾಗುವುದು.

**9. ನೇಮಕಾತಿ ಹೊಂದಿದ ಅಭ್ಯರ್ಥಿಗಳ ಸ್ಥಳ ನಿಯುಕ್ತಿ:**

ನೇಮಕಾತಿ ಹೊಂದಿದ ಅಭ್ಯರ್ಥಿಯು ಪ್ರಪ್ರಥಮವಾಗಿ ನೇಮಕ ಮಾಡಿದ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

**10. ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರುವ ಅಭ್ಯರ್ಥಿಗಳು ಸಲ್ಲಿಸಬೇಕಾದ ದಾಖಲೆ/ಪ್ರಮಾಣ ಪತ್ರಗಳ ವಿವರ:** ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರ ಹಾಗೂ ಆದಾಯ ಪ್ರಮಾಣ ಪತ್ರ, ಇತ್ಯಾದಿ ಮೀಸಲಾತಿ ಕುರಿತು ಪ್ರಮಾಣ ಪತ್ರಗಳನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

10.1 ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಡಿ"ರಲ್ಲಿ ಪಡೆದಿರಬೇಕು.

10.2 ಪ್ರವರ್ಗ–I ಕ್ಕೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಇ"ರಲ್ಲಿ ಪಡೆದಿರಬೇಕು.

10.3 ಪ್ರವರ್ಗ–IIಎ, IIಬಿ, IIIಎ ಮತ್ತು IIIಬಿ. ಗೆ ಸೇರಿದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಆದಾಯ ಮತ್ತು ಜಾತಿ ಪ್ರಮಾಣ ಪತ್ರವನ್ನು "ನಮೂನೆ–ಎಫ್"ರಲ್ಲಿ ಪಡೆದಿರಬೇಕು.

<u>**ವಿಶೇಷ ಸೂಚನೆ:–**</u>"ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಐದು (5) ವರ್ಷಗಳಿಗಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

10.4 ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಯು ಸಂಬಂಧಪಟ್ಟ ತಹಶೀಲ್ದಾರ್‌ರಿಂದ "ನಮೂನೆ–3" ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಪಡೆದಿರಬೇಕು.

10.5 ಮಾಜಿ ಸೈನಿಕ ಅಭ್ಯರ್ಥಿಗಳು ಸಂಬಂಧಪಟ್ಟ ಘಟಕದಿಂದ ಡಿಸ್‌ಚಾರ್ಜ್ ಹೊಂದಿದ ಬಗ್ಗೆ ಮೂಲ ಪ್ರಮಾಣ ಪತ್ರ ಮತ್ತು ಪೆನ್‌ಷನ್ ಪಡೆಯುತ್ತಿರುವ ಬಗ್ಗೆ ದಾಖಲೆ ಪತ್ರ ಪಡೆದಿರಬೇಕು ಹಾಗೂ ಮಾಜಿ ಸೈನಿಕ ಮೀಸಲಾತಿಗೆ ನಿಯಮಾನುಸಾರ ಅರ್ಹರೇ ಎಂಬ ಬಗ್ಗೆ ಪ್ರಮಾಣ ಪತ್ರವನ್ನು ಹತ್ತಿರದ ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆಯಿಂದ ಪಡೆದಿರಬೇಕು.

10.6 (ಅ) ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು 1ನೇ ತರಗತಿಯಿಂದ 7ನೇ ತರಗತಿಯವರೆಗೆ (ಎಲ್ಲಾ ವರ್ಷಗಳು) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ಸಂಬಂಧಪಟ್ಟ ಶಾಲಾ ಮುಖ್ಯೋಪಾಧ್ಯಾಯರಿಂದ ನೀಡಲಾದ "ನಮೂನೆ–2"ನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮೇಲು ರುಜು ಮಾಡಿದ ಪ್ರಮಾಣ ಪತ್ರವನ್ನು ಪಡೆದಿರಬೇಕು.

(ಆ) ಗ್ರಾಮೀಣ ಮೀಸಲಾತಿ ಕೋರಿರುವ ಸಾಮಾನ್ಯ ಅರ್ಹತೆಯ (General Merit) ಅಭ್ಯರ್ಥಿಗಳು ಮೇಲೆ 10.6(ಅ) ರಲ್ಲಿ ತಿಳಿಸಿರುವ "ನಮೂನೆ–2" ರ ಜೊತೆಗೆ ನಿಗದಿತ "ನಮೂನೆ–1" ರಲ್ಲಿ ಸಂಬಂಧಪಟ್ಟ ತಹಶೀಲ್ದಾರರಿಂದ ಅವರು ಮೇಲುಸ್ಥರ (Creamy Layer) ಪರಿಮಿತಿಯಲ್ಲಿ ಬರುವುದಿಲ್ಲವೆಂದು ದೃಢೀಕರಿಸಿರುವ ಪ್ರಮಾಣ ಪತ್ರ ಪಡೆದಿರಬೇಕು.

<u>**ವಿಶೇಷ ಸೂಚನೆ:–**</u> ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಪ್ರವರ್ಗ–I, IIಎ, IIಬಿ, IIIಎ ಮತ್ತು IIIಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಆದಾಯ ಮತ್ತು ಜಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

10.7 ಕನ್ನಡ ಮಾಧ್ಯಮ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು 1ನೇ ತರಗತಿಯಿಂದ 7ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿದ ಪ್ರಮಾಣ ಪತ್ರ ಪಡೆದಿರಬೇಕು.

10.8 ಅರಣ್ಯ ಪ್ರೇರಕರಾಗಿ ಅಧಿಸೂಚನೆ ದಿನಾಂಕಕ್ಕೆ ಐದು (5) ವರ್ಷಗಳ ಸೇವೆಯನ್ನು ಸಲ್ಲಿಸಿದ್ದು, ಪ್ರಸ್ತುತ ಅರಣ್ಯ ಪ್ರೇರಕರಾಗಿ ಮುಂದುವರೆಯುತ್ತಿರುವ ಅರಣ್ಯ ಪ್ರೇರಕರ ಬಗ್ಗೆ ಸಂಬಂಧಿಸಿದ ಸಾಮಾಜಿಕ ಅರಣ್ಯ ವಿಭಾಗಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

10.9 ಅಂಗವಿಕಲರಿಗೆ ಮೀಸಲಿರಿಸಿದ ಹುದ್ದೆಗಳಿಗೆ ಮೀಸಲಾತಿ ಕೋರುವ ಅಭ್ಯರ್ಥಿಗಳು **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೆನೆನಿ 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ **ಕುಷ್ಠರೋಗದಿಂದ ಗುಣಮುಖರಾಗಿರುವ ಬಗ್ಗೆ** ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**11.0 ಗಮನಿಸಬೇಕಾದ ಮುಖ್ಯ ಅಂಶಗಳು:**

11.1 ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಆಯ್ಕೆಗೆ ಅರ್ಹತೆ ಪಡೆಯುವುದಿಲ್ಲ.

11.2 ಅಭ್ಯರ್ಥಿಗಳು ಅರ್ಜಿ ಹಾಕುವ ಮೊದಲು ದೇಹದಾರ್ಢ್ಯತೆಯ ಕುರಿತು ಸದರಿ ಹುದ್ದೆಗೆ ನಿಗದಿಪಡಿಸಿರುವ ಮಾನದಂಡವು ತಮಗೆ ಇರುವ ಕುರಿತು ಖಚಿತಪಡಿಸಿಕೊಂಡು ಅರ್ಜಿಯನ್ನು ಸಲ್ಲಿಸಲು ತಿಳಿಸಿದೆ.

11.3 ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರುವ ಅಭ್ಯರ್ಥಿಗಳು ಅರಣ್ಯ ವೀಕ್ಷಕ ಹುದ್ದೆಗೆ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ. ಕುಷ್ಠರೋಗದಿಂದ ಗುಣಮುಖ ಹೊಂದಿದ ಅಭ್ಯರ್ಥಿಗಳು ಯಾವುದೇ ವಿಧದ ಅಂಗವಿಕಲತೆಯನ್ನು ಹೊಂದಿರಬಾರದು.

11.4 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಆನ್‌ಲೈನ್ ಅರ್ಜಿಯ ಒಂದು ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

11.5 ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವಾಗ ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಬಾರದು. ಅಸ್ಪಷ್ಟ/ಅಪೂರ್ಣ/ತಪ್ಪು ಅಥವಾ ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಭ್ಯರ್ಥಿಗಳೇ ಅದಕ್ಕೆ ನೇರ ಮತ್ತು ಸಂಪೂರ್ಣ ಜವಾಬ್ದಾರರಾಗುತ್ತಾರೆ. ಅಭ್ಯರ್ಥಿಗಳು ನಿಗದಿತ ಅರ್ಜಿಯಲ್ಲಿ ನೀಡಿರುವ ಮಾಹಿತಿ/ವಿವರಗಳನ್ನು ಯಾವುದೇ ಹಂತದಲ್ಲಿಯೂ ಬದಲಾವಣೆ ಮಾಡಲು ಅವಕಾಶ ನೀಡಲಾಗುವುದಿಲ್ಲ. ಆದ ಪ್ರಯುಕ್ತ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವಾಗ ಈ ಕಚೇರಿಯ ಅಧಿಸೂಚನೆಯಲ್ಲಿ ತಿಳಿಸಿರುವ ಎಲ್ಲಾ ಅಂಶಗಳು ಹಾಗೂ ಅರ್ಜಿ ಭರ್ತಿ ಮಾಡುವ ವಿಧಾನದ ಕುರಿತು ಸೂಚಿಸಿರುವ ಎಲ್ಲಾ ಅಂಶಗಳನ್ನು ಸರಿಯಾಗಿ ಅರ್ಥೈಸಿಕೊಂಡು, ಅರ್ಜಿಯನ್ನು ಸರಿಯಾಗಿ ಮತ್ತು ಸಮರ್ಪಕವಾಗಿ ಭರ್ತಿ ಮಾಡತಕ್ಕದ್ದು.

11.6 ಪ್ರವರ್ಗದ ಮೀಸಲಾತಿಯಲ್ಲಿ ಆಯ್ಕೆ ಬಯಸುವ ಅಭ್ಯರ್ಥಿಗಳು ಅರ್ಜಿಯಲ್ಲಿ ಪ್ರವರ್ಗದ ಕಾಲಂ ಅನ್ನು ಕಡ್ಡಾಯವಾಗಿ ನಮೂದಿಸಬೇಕು. ಈ ಕಾಲಂ ಅನ್ನು ಭರ್ತಿ ಮಾಡದೆ ಖಾಲಿ ಬಿಟ್ಟಲ್ಲಿ "ಸಾಮಾನ್ಯ ಅರ್ಹತೆ" ಎಂದು ಪರಿಗಣಿಸಲಾಗುವುದು. ಯಾವುದೇ ಹಂತದಲ್ಲಿ ಅಭ್ಯರ್ಥಿಯು ತಾನು ಹೊಂದಿರುವ ಪ್ರವರ್ಗದ ಕುರಿತು ಮಾಹಿತಿಯನ್ನು ಹೊಸದಾಗಿ ಸೇರ್ಪಡೆ ಮಾಡಲು ಅಥವಾ ಬದಲಾವಣೆ ಮಾಡಲು ಅವಕಾಶವಿಲ್ಲ.

11.7 ಒಬ್ಬನೇ ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ತಾನು ಸಲ್ಲಿಸಿರುವ ಎಲ್ಲಾ ಅರ್ಜಿಗಳಲ್ಲಿಯೂ ಒಂದೇ ರೀತಿ ಮಾಹಿತಿಯನ್ನು ನೀಡಿದಲ್ಲಿ ಅಭ್ಯರ್ಥಿ ಸಲ್ಲಿಸಿರುವ ಯಾವುದಾದರೂ ಒಂದು ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು. ಈ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ.

11.8 ಅಭ್ಯರ್ಥಿಯು ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯು ಸಲ್ಲಿಸಿದ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

11.9 ಪ್ರಸ್ತುತ ಸರ್ಕಾರಿ (ಕೇಂದ್ರ ಸರ್ಕಾರ/ಕರ್ನಾಟಕ ರಾಜ್ಯ ಸರ್ಕಾರ/ಇತರೆ ರಾಜ್ಯಗಳು) ಹಾಗೂ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಕಡ್ಡಾಯವಾಗಿ ಅನುಮತಿ ಪತ್ರವನ್ನು ಪಡೆದಿಟ್ಟುಕೊಂಡು ಅರಣ್ಯ ಇಲಾಖೆಯು ಅಪೇಕ್ಷಿಸಿದಾಗ ನೀಡತಕ್ಕದ್ದು.

11.10 ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದಲ್ಲಿ ಅಂತಹ ಅಭ್ಯರ್ಥಿಯನ್ನು ಆಯ್ಕೆ ಪ್ರಕ್ರಿಯೆಯಿಂದ ಅನರ್ಹಗೊಳಿಸಲಾಗುವುದು.

11.11 ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

11.12 ಕಾನೂನು ಬಾಹಿರವೆಂದು ಘೋಷಿಸಲಾದ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘದ/ಸಂಘಗಳ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಸ್ಥೆ/ಸಂಸ್ಥೆಗಳು ಅಥವಾ ಸಂಘ/ಸಂಘಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

11.13 ಅಭ್ಯರ್ಥಿಯು ಸಮಾಜಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

11.14 ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿಯರನ್ನು / ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೇ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

11.15 ಯಾವುದೇ ಅಭ್ಯರ್ಥಿಯು ಕೇಂದ್ರ ಅಥವಾ ಯಾವುದೇ ರಾಜ್ಯ ಸರ್ಕಾರ / ಸರ್ಕಾರಿ ಸಂಸ್ಥೆಗಳಿಗೆ ನಡೆಸುವ ಯಾವುದೇ ಪರೀಕ್ಷೆಗಳಿಗೆ ಅಥವಾ ಆಯ್ಕೆಗಳಿಗೆ ಹಾಜರಾಗಲು ತಾತ್ಕಾಲಿಕವಾಗಿ ಬಹಿಷ್ಕರಿಸಲ್ಪಟ್ಟಿದ್ದರೆ ಅಥವಾ ಖಾಯಂ ಆಗಿ ಅನರ್ಹಗೊಂಡಿದ್ದರೆ ಅಥವಾ ಬಹಿಷ್ಕರಿಸಲ್ಪಟ್ಟಿದ್ದರೆ, ಅಂತಹ ಅಭ್ಯರ್ಥಿಯು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

11.16 ಅಭ್ಯರ್ಥಿಯು ನೇಮಕಾತಿ ಪರೀಕ್ಷೆಗೆ ಬೇರೊಬ್ಬ ವ್ಯಕ್ತಿಯನ್ನು ತನ್ನ ಪರವಾಗಿ ಕಳುಹಿಸಿದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಈ ನೇಮಕಾತಿಗೆ ಅವರನ್ನು ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

11.17 ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ–ಎಸ್‌ಪಿಎಲ್–04–ಪಿಇಟಿ–2005 ದಿನಾಂಕ 31–3–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಈ ನೇಮಕಾತಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

11.18 ಆಯ್ಕೆ ಮತ್ತು ನೇಮಕಾತಿ ಪ್ರಕ್ರಿಯೆಯ ಯಾವುದೇ ಹಂತದಲ್ಲಿ ಆಯ್ಕೆಗೆ ಪರಿಗಣಿಸಿರುವ ಅಂಶಗಳ ಬಗ್ಗೆ ವ್ಯತ್ಯಾಸ ಕಂಡು ಬಂದಲ್ಲಿ ಅಥವಾ ಆಕ್ಷೇಪಣೆ ಸಲ್ಲಿಕೆಯಾದಲ್ಲಿ, ಕೋರ್ಟು ತೀರ್ಪುಗಳು, ಸರಕಾರದ ನಿರ್ದೇಶನಗಳು, ಇಲಾಖೆ ಸುತ್ತೋಲೆಗಳು ಬಂದಲ್ಲಿ, ಪ್ರಕಟಿಸಿರುವ ಆಯ್ಕೆ ಪಟ್ಟಿಯಲ್ಲಿ ಸೂಕ್ತ ಬದಲಾವಣೆ ಮಾಡಿ ಆಯ್ಕೆ ಪಟ್ಟಿ ಪರಿಷ್ಕರಿಸುವ ಅಧಿಕಾರವನ್ನು ಆಯ್ಕೆ ಪ್ರಾಧಿಕಾರವು ಹೊಂದಿರುತ್ತದೆ.

11.19 ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಮತ್ತು ಮೀಸಲಾತಿ ವರ್ಗೀಕರಣದಲ್ಲಿ ಏನಾದರೂ ಬದಲಾವಣೆ ಮಾಡಬೇಕಾದ ಅವಶ್ಯಕತೆ ಕಂಡು ಬಂದಲ್ಲಿ ಬದಲಾವಣೆ ಮಾಡಲಾಗುವುದು ಮತ್ತು ಬದಲಾದ ವಿವರಗಳನ್ನು ಇಲಾಖಾ ವೆಬ್‌ಸೈಟ್: **www.karnatakaforest.gov.in** ನಲ್ಲಿ ಪ್ರಕಟಿಸಲಾಗುವುದು.

11.20 ಅಭ್ಯರ್ಥಿಯು ಹುದ್ದೆಗೆ ಅರ್ಜಿ ಸಲ್ಲಿಸಿದ ತಕ್ಷಣ ತಾನು ನಿಯಮ ಮತ್ತು ಅಧಿನಿಯಮಗಳಿಗೆ (Rules & Regulations) ಬದ್ಧನಾಗಿರುತ್ತಾನೆ ಎಂದು ಭಾವಿಸಲಾಗಿರುತ್ತದೆ. ಒಂದು ವೇಳೆ ತಾನು ಸದರಿ ಹುದ್ದೆಗೆ ಆಯ್ಕೆಯಾಗದ ಪಕ್ಷದಲ್ಲಿ ತದನಂತರ ಅದೇ ನಿಯಮಗಳನ್ನು ಪ್ರಶ್ನಿಸಲು ಬರುವುದಿಲ್ಲ.

11.21 ಉತ್ತರ ಪತ್ರಿಕೆಯನ್ನು ಸ್ಕ್ಯಾನಿಂಗ್ ಮಾಡಿಸಿ ಗಣಕ ಯಂತ್ರದ ಮುಖೇನ ಅರ್ಹತಾ ಪಟ್ಟಿಯನ್ನು ಸಿದ್ಧಪಡಿಸುವುದರಿಂದ ಲಿಖಿತ ಪರೀಕ್ಷೆಗೆ ಅರ್ಹತೆ ಪಡೆದಿರುವ ಅಭ್ಯರ್ಥಿಗಳು ಉತ್ತರ ಪತ್ರಿಕೆಯ ಮಾಹಿತಿಯನ್ನು ಭರ್ತಿ ಮಾಡುವ ಸಲುವಾಗಿ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ ಅರ್ಧ ಗಂಟೆ ಮುಂಚಿತವಾಗಿ ಪರೀಕ್ಷಾ ಕೊಠಡಿಗೆ ತಪ್ಪದೇ ಹಾಜರಾಗತಕ್ಕದ್ದು. ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಕೆಲವು ಮಾರ್ಗಸೂಚನೆಗಳನ್ನು ನೀಡುತ್ತಾರೆ.

ಸ್ಥಳ: ಚಿಕ್ಕಮಗಳೂರು,
ದಿನಾಂಕ: 18–03–2013

**ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,**
**ಮತ್ತು ಆಯ್ಕೆ ಪ್ರಾಧಿಕಾರ,**
**ಚಿಕ್ಕಮಗಳೂರು ವೃತ್ತ, ಚಿಕ್ಕಮಗಳೂರು.**

**P.R. 56**

## IN THE COURT OF DISTRICT AND SESSIONS JUDGE, AT CHICKBALLAPUR

**Sub :** Recruitment for the 05 posts of Process Servers– reg.

**Read:**
1. Letter No.LCA-I/220/96 dated 08.03.2010 & LCA.II-164/2009 Dated : 18.03.2010 of Hon'ble High Court of Karnataka, Bangalore to fill up 05 Posts of Process-servers.
2. This office Notification No.1/2011, dt:01.3.11.
3. Letter No.LCA-II/127/2012, dt:08.05.12 of Hon'ble High Court of Karnataka, Bangalore.
4. This office Note dt:10.04.13 and orders passed thereon.

### RE-NOTIFICATION No. 3/13, DT:16/04/13

### LAST DATE FOR RECEIPT OF APPLICATIONS IS 30.05.2013.

This amended Notification is issued in respect of recruitment of 05 posts of Process Servers instead of 09 as called for vide Notification No. cited at reference No.2 above.

The Applications in the prescribed Proforma appended to this Notification are invited from the candidates, who are qualified as on the last date fixed for receipt of the applications for appointment to the 05-Posts of Process-Servers in the Unit of District and Sessions Court, Chickballapur. The details of Vacancies are classified as under:-

| Sl. No | Name of the Post | No. of Vacan-cies | Reserved For | Classification | | | | | | | | |
|---|---|---|---|---|---|---|---|---|---|---|---|---|
| | | | | GM | S.C. | S.T. | Cat-I | II-A | II-B | III-A | III-B | Total |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 01 | PROCESS SERVERS | 05 | Women | 01 | 01 | -- | -- | -- | -- | -- | -- | 02 |
| | | | Ex-serviceman | -- | -- | -- | -- | -- | -- | -- | -- | -- |
| | | | Physically handicapped | -- | -- | -- | -- | -- | -- | -- | -- | -- |
| | | | Project affected | -- | -- | -- | -- | -- | -- | -- | -- | -- |
| | | | Rural | 01 | -- | -- | -- | 01 | -- | -- | -- | 02 |
| | | | Kannada Medium | 01 | -- | -- | -- | -- | -- | -- | -- | 01 |
| | | | Others | -- | -- | -- | -- | -- | -- | -- | -- | -- |
| | | | TOTAL | 03 | 01 | -- | -- | 01 | -- | -- | -- | 05 |

**I. MINIMUM QUALIFICATION FOR THE POST OF PROCESS-SERVERS :**

1) Must have passed SSLC
2) Preference will be given to the candidates possessing Driving License.

Scale of Pay Rs. 11000-200-12000-250-13000-300-14200-350-15600-400-17200-450-19000 with admissible allowances.

**II. AGE LIMIT :**

Must have attained the age of 18 years as on the last date fixed for filing application and must have not attained the age of :

**1** 40 years in case of persons belonging to SC/ST and Category-I.

**2** 38 years in case of persons belonging to any of the category-IIA, or II-B or III-A or III-B of other Backward Classes and

**3** 35 years in case of others as on last date fixed for submission of his/her application.

**4** Candidates claiming the benefit of reservation Categories under SC/ST/CAT-1/II-A/II-B/III-A/III-B/Rural/Kannada Medium / Ex-Servicemen/ Physically Handicapped/Widows should furnish the certificate/s in the prescribed Form & such Certificate/s should have been issued by the competent authority.

**5** The candidates should note that, if on verification, certificate produced is found to be false, the candidates who made such false, their claim will be prosecuted in accordance with the relevant provision of Indian Penal Code and such candidates will also forfeit their claims for such selection.

**III. METHOD OF RECRUITMENT :**

Selection of Candidates shall be made in accordance with the provisions contemplated in the Karnataka Sub-Ordinate Courts (Ministerial and other Posts) (Recruitment) (Amendment) Rules 2007.

The number of candidates to be included in such list of eligible candidates for interview, for the post of process-server shall be equivalent to twenty five times of the total number of vacancies notified.

**IV. PROBATION :**

Candidates will be appointed on probation for a period of two years and the provisions of KCS (Probation) Rules 1977 shall MUTATIS MUTANDIS apply to candidates so selected. During the probation the candidates shall pass the Kannada Language Examination and Departmental Examinations prescribed to the post under the K.C.S.(Kannada Language Examination) Rules 1974.

**V. APPLICANTS WHEN CALLED FOR INTERVIEWS MUST APPEAR AT THEIR OWN EXPENSES.**

Candidates should submit their Typed/Computerized applications, complete in all aspects, together with copies of all the testimonials attested by the candidates in support of age, qualification and caste in the prescribed form issued by the competent authority so as to reach the District and Sessions Judge, Chickballapur on or before **30.05.2013** Envelope containing the applications should be super scribed as **"Applications for the Post of Process Server".**

1) The In-service candidates shall submit their applications through proper channel.
2) Defective/Incomplete/applications are liable to be rejected.
3) The candidates who attempt to obtain extraneous support for his/her candidature shall not be eligible for selection.
4) The candidates who wish to apply more than one post shall submit the application in separate.

**APPLICATION IN THE PRESCRIBED PROFORMA SHOULD BE FILLED IN BY THE CANDIDATES IN THEIR HANDWRITING AND MUST BE ACCOMPANIED BY THE FOLLOWING:**

1) Copies of marks cards should be attested by the candidates themselves.
2) Three Certificate of good character, one from the Principal of College/Head Master/Head Mistress or Institution in which he/she had last studied and two from respectable persons unconnected with him/her testifying to his/her character.
3) Copy of SSLC/TC in support of age proof attested by the candidates.
4) Citizenship certificate (where the candidate is not a citizen of Indian by birth) issued by the DC/District Magistrate of the District in which the candidate is residing.
5) One pass port size photo of candidate shall be affixed on the application with self-attestation.
6) Applicants to produce self addressed envelope with required prescribed postal stamps of Rs.6/-.
7) Any application received after the due date and incomplete applications will not be entertained.
8) If he or she does not get intimation for the interview it shall be presumed that he/she is not eligible for the interview. No correspondence will be entertained there after if any of the Candidate is not called for the interview.
9) The number of vacancies on the classification as noted above is subject to variation.
10) The candidates who have all ready applied for the post of Process Servers vide this office notification No.1/2011, dt:18.03.11 need not apply once again, as their applications will be considered this time also if they are eligible.

Place : Chickballapur

Dated : 16.04.2013

**S.Y.IRANNVAR,**
District & Sessions Judge, Chickballapur

## APPLICATION FORM

## APPLICATION FOR THE POST OF "PROCESS SERVER"

Space for
Pasting Photo

To:
The Hon'ble District and Sessions Judge,
Chickballapur.

Sir,

In response to the Notification No.Adm.03/2013 Dated:16.04.13, I am herewith submitting my application for the post of **"Process Server"** with the following documents and information.

| | | | | |
|---|---|---|---|---|
| 01 | Name of the applicant in full (in Block letters) | | | |
| 02 | Name of his/her father or mother or husband | | | |
| 03 | Date of Birth | | | |
| 04 | Residential Address of the applicant with Phone Number. | | | |
| 05 | Address of communication with Phone Number | | | |
| 06 | QUALIFICATIONS:<br>(With reference to posts as the case may be) | Month & year of passing | Maximum Marks | Marks obtained |
| | a) SSLC or equivalent examination | | | |
| | b) Other examinations, if any, passed, with details | | | |
| 07 | a).Candidate's Religion, Caste or Community.<br>b) Whether the candidate belongs to : SC/ST/Cat-I, II-A, II-B, III-A, III-B or under any other reserved category. (A copy of the certificate in support of the claims should be enclosed) | | | |
| 08 | Whether the applicant is an Indian Citizen, if not, what is his/her nationality (enclose the relevant Certificate) | | | |
| 09 | Whether the applicant is married/ unmarried if married do you have more than one spouse living | | | |
| 10 | Whether you have been prosecuted for any offence. | | | |
| 11 | Profession of Father & Mother with their Annual Income | | | |
| 12 | Whether the applicant has enrolled his name in the employment, if enrolled furnish the copy of employment card. | | | |
| 13 | Whether the relatives of the applicants are Government Servants? If Yes furnish the particulars. | | | |
| 14 | Do you belong to Ex-Serviceman, Physically Handicapped, Widow, Rural / Kannada Medium Category, if yes then attach attested copy of the Certificates in support of your claim. | | | |

I hereby solemnly declare that all the information and particulars given above are true to the best of my knowledge and belief and in the event of any information being found false/incorrect any stage my candidature is liable to cancelled.

Place:

Date: **Signature of Applicant**

**P.R. 57**

## IN THE COURT OF DISTRICT AND SESSIONS JUDGE, AT CHICKBALLAPUR

**Sub :** Recruitment to the One post of Stenographer– reg.

**Read:**
1. Letter No.LCA-II/54/11 dated 27.12.2011 of Hon'ble High Court of Karnataka, Bangalore to fill up 01 Post of Stenographer in this unit.
2. This office Notification No. 1/12, dtd: 5.1.12.
3. This office Re-Notification No.5/12, dt: 06.10.12
4. This office note dt:10.04.13 and orders passed thereon.

### RE-NOTIFICATION No.2/2013

### Dated : 16/04/2013

### LAST DATE FOR RECEIPT OF APPLICATIONS IS 30.05.2013.

The Applications invited as per this office Notification No. 1/2012, dtd: 5.1.2012, and Re-Notification No.5/12 dt:06.10.12, but no applications received from the eligible candidates for recruitment to the one post of Stenographer. Therefore, the applications are invited from the eligible candidates through this Notification.

The Applications in the prescribed Proforma are invited from eligible candidates, who are qualified as on the last date fixed for receipt of the applications for appointment to the **One Post of Stenographer** in the Unit of District and Sessions Court, Chickballapur. The details of Vacancy & reservation are classified as under:-

| Sl. No. | Reserved For | Classification | | | | | | | | |
|---|---|---|---|---|---|---|---|---|---|---|
| | | GM | S.C. | S.T. | Cat-I | II-A | II-B | III-A | III-B | TOTAL |
| 1 | 4 | 5 | 6 | 7 | 8 | 9 | 10 | 11 | 12 | 13 |
| 01 | Women | -- | -- | -- | -- | -- | -- | -- | -- | -- |
| | Ex-serviceman | -- | -- | -- | -- | -- | -- | -- | -- | -- |
| | Physically handicapped | -- | -- | -- | -- | -- | -- | -- | -- | -- |
| | Project affected | -- | -- | -- | -- | -- | -- | -- | -- | -- |
| | Rural | -- | -- | -- | -- | 01 | -- | -- | -- | 01 |
| | Kannada Medium | -- | -- | -- | -- | -- | -- | -- | -- | -- |
| | Others | -- | -- | -- | -- | -- | -- | -- | -- | -- |
| | TOTAL | -- | -- | -- | -- | 01 | -- | -- | -- | 01 |

**I. MINIMUM QUALIFICATION FOR THE POST OF STENOGRAPHER :-**

1) The candidates must have passed SSLC or equivalent examination
2) The candidates must have passed Senior Typewriting and Senior Shorthand both in Kannada and English language conducted by the Department of Public Instructions of the Karnataka Secondary Examination Board or possess an Equivalent Qualification.
3) The Computer knowledge is a must for the candidates and they have to pass Computer Literacy Test within their Probationary Period vide Order No. DPAR 59/SCR/2012, dated: 7.7.2012 w.e.f. 22.3.2012.

Scale of Pay:- Rs.14550-350-15600-400-17200-450-19000-500-21000-600-24600-700-26700 with admissible allowances.

**II. AGE LIMIT :**

The candidates must have attained the age of 18 years as on the last date fixed for filing applications and must have not attained the age of :

1) 40 years in case of persons belonging to SC/ST and Category-I.
2) 38 years in case of persons belonging to any of the category-IIA, or II-B or III-A or III-B of other Backward Classes and
1) 35 years in case of others as on last date fixed for submission of his/her application.
2) Candidates claiming the benefit of reservation under II-A Category should furnish the certificate/s in the prescribed Form & such Certificate/s should have been issued by the competent authority. The candidates should note that, if on verification, certificate is found to be false, the candidates who made such false claim will be prosecuted in accordance with the relevant provision of Indian Penal Code and such candidates will also forfeit their claims for such selection.

**III. METHOD OF RECRUITMENT :**

The Selection of Candidates shall be made in accordance with the provisions contemplated in the Karnataka Sub-Ordinate Courts (Ministerial and other Posts) (Recruitment) (Amendment) Rules 2007.

The Test will be conducted for the post of Stenographer. The candidates must have to appear before the District and Sessions Judge in the premises of District Court, Chickballapur at their own costs.

**IV. The Qualifying test for selection of the Stenographer.**

1) A dictation at the rate of 120 words per minute shall be given for a duration of about five minutes and candidate shall transcribe the notes within forty five minutes.

2) The number of candidates for the post of Stenographer to be included in the eligible list of candidates for interview shall be equivalent to 05 times to total number of vacancies notified.

**V. PROBATION :**

Candidate will be appointed on probation for a period of two years and the provisions of KCS (Probation) Rules 1977 shall MUTATIS MUTANDIS apply to candidates so selected. During the probation the candidates shall pass the Kannada Language Examination and Departmental Examinations prescribed to the post under the K.C.S.(Kannada Language Examination) Rules 1974.

**VI. APPLICANTS WHEN CALLED FOR INTERVIEWS MUST APPEAR AT THEIR OWN EXPENSES.**

The Candidates should submit their Applications, complete in all aspects, together with copies of all the testimonials attested by the candidates in support of their age, qualification caste and income in the prescribed form issued by the competent authority so as to reach the District and Sessions Judge, Chickballapur on or before **30.05.2013.** Envelope containing the application should be super scribed as **"Application for the Post of Stenographer."**

1) The In-service candidates shall submit their applications through proper channel.

2) Defective/Incomplete/applications are liable to be rejected.

3) The candidates who attempt to obtain extraneous support for his/her candidature shall not be eligible for selection.

**VII. APPLICATION IN THE PRESCRIBED PROFORMA SHOULD BE FILLED IN BY THE CANDIDATES IN THEIR OWN HANDWRITING AND MUST BE ACCOMPANIED BY THE FOLLOWING TESTIMONIALS:**

1) Copies of Marks Cards attested by the candidates.

2) The Candidates claiming the benefit under reservations shall produce a certificate in the form prescribed by the Government issued by the Competent Authority.

3) The Persons claiming reservations under the quota of Rural and Kannada Medium shall produce certificates issued by the competent authority.

4) Three Certificate of good character, one from the Principal of College/Head Master/Head Mistress or Institution in which he/she had last studied and two from respectable persons unconnected with him/her testifying to his/her character

5) Copy of SSLC/TC in support of Age proof attested by the candidates.

6) Citizenship certificate (where the candidate is not a citizen of Indian by birth) issued by the DC/District Magistrate of the District in which the candidate is residing.

7) One pass port size photo of candidate shall be affixed on the application with self-attestation.

8) Applicants to produce self addressed envelope with required prescribed postal stamps of Rs.6/- for intimation regarding interview and candidates shall furnish their Landline or Mobile number in the address column.

9) Any application received after the due date and incomplete application will not be entertained.

10) If he or she does not get intimation for the interview it shall be presumed that he/she is not eligible for the interview. No correspondence will be entertained there after if any of the Candidate is not called for the interview.

11) The number of vacancies on the classification as noted above is subject to variation.

12) The candidates should submit their requisitions in the Application Proforma enclosed to this Notification either typed, or computerized or Xerox of the Proforma.

Place : Chickballapur
Dated : 16.04.2013

**S.Y.IRANNVAR,**
District & Sessions Judge, Chickballapur

## APPLICATION FORM

## APPLICATION FOR THE POST OF "STENOGRAPHER"

Space for Pasting Photo

To:
The Hon'ble District and Sessions Judge,
Chickballapur.

Sir,

In response to the Notification No.Adm.02/2013 Dated: 16.04.2013, I am herewith submitting my application for the post of **"STENOGRAPHER"** with the following particulars and Xerox copies of Testimonials.

| | | | | |
|---|---|---|---|---|
| 01 | Name of the applicant in full (in Block letters) | | | |
| 02 | Name of his/her father or mother or husband | | | |
| 03 | Date of Birth | | | |
| 04 | Residential Address of the applicant with phone number. | | | |
| 05 | Address for communication with phone number. | | | |
| 06 | QUALIFICATIONS:<br>(With reference to posts as the case may be) | Month & year of passing | Maximum Marks | Marks obtained |
| | a) SSLC or equivalent examination | | | |
| | b) Senior English Typing | | | |
| | c) Senior Kannada Typing | | | |
| | c) Senior English Shorthand | | | |
| | d) Senior Kannada Shorthand | | | |
| 07 | a).Candidate's Religion, Caste or Community.<br>b) Whether the candidate belongs to : SC/ST/Cat-I, II-A, II-B, III-A, III-B or under any other reserved category. (A copy of the certificate in support of the claims should be enclosed) | | | |
| 08 | Whether the applicant is an Indian Citizen, if not, what is his/her nationality (enclose the relevant Certificate) | | | |
| 09 | Whether the applicant is married/ unmarried if married do you have more than one spouse living | | | |
| 10 | Whether you have been prosecuted for any offence. | | | |
| 11 | Profession of Father & Mother with their Annual Income | | | |
| 12 | Whether the applicant has enrolled his name in the employment, if enrolled furnish the copy of employment card. | | | |
| 13 | Whether the relatives of the applicants are Government Servants? If Yes furnish the particulars. | | | |
| 14 | Do you belong to Ex-Serviceman/Physically Handicapped / Widow / Rural / KMS Category, then attach attested copy of the Certificate in support of your claim. | | | |

I hereby solemnly declare that all the information and particulars given above are true to the best of my knowledge and belief and in the event of any information being found false/incorrect any stage my candidature is liable to cancelled.

Place:

Date: **Signature of Applicant**

**P.R. 58**

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಚಾಮರಾಜನಗರ**

**ಅಧಿಸೂಚನೆ ಸಂಖ್ಯೆ. ಎಡಿಎಮ್‌ಎನ್ / 877 /2013 ದಿನಾಂಕ: 30.03.2013**

**ವಿಷಯ:** ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ, ಬೆರಳಚ್ಚುಗಾರರ ಮತ್ತು ಸೇವಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:** 1. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅನುಮತಿ ಮೇರೆಗೆ ಹೊರಡಿಸಲಾದ ಈ ಕಛೇರಿ ಅಧಿಸೂಚನೆ ಸಂಖ್ಯೆ: ಎಡಿಎಮ್‌ಎನ್/2473/ 2012, ದಿನಾಂಕ 11-10-2012 ರಲ್ಲಿ ಭರ್ತಿಯಾಗದೇ ಉಳಿದಿರುವ 5 ಶೀಘ್ರಲಿಪಿಗಾರರ ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು.

2. ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-II, 128/2012, ದಿನಾಂಕ 21.01.2013 ರಲ್ಲಿ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದಲ್ಲಿ ಹೊಸದಾಗಿ ಸ್ಥಾಪನೆಯಾಗುವ ನ್ಯಾಯಾಲಯಕ್ಕೆ ಹೊಸದಾಗಿ ಸೃಜಿಸಲಾಗಿರುವ ಶೀಘ್ರಲಿಪಿಗಾರರ 1 ಹುದ್ದೆ , ಬೆರಳಚ್ಚುಗಾರರ 1 ಹುದ್ದೆ ಮತ್ತು ಸೇವಕರ 2 ಹುದ್ದೆಗಳನ್ನು ತುಂಬಲು ಮಂಜೂರಾತಿ ನೀಡಲಾದ ಮೇರೆಗೆ.

ಮೇಲ್ಕಂಡ ಅಧಿಸೂಚನೆ ಅನ್ವಯ ಚಾಮರಾಜನಗರದ ಜಿಲ್ಲಾ ನ್ಯಾಯಾಂಗ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ 6 (5 ಹಿಂಬಾಕಿ ಹುದ್ದೆಗಳು + 1 ) ಹುದ್ದೆಗಳಿಗೆ ಬೆರಳಚ್ಚುಗಾರರ 1 ಹುದ್ದೆಗೆ ಮತ್ತು ಸೇವಕರ 2 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಈ ಅಧಿಸೂಚನೆ0ಯೊಡನೆ ಲಗಲತ್ತಿಸಿರುವ ಅರ್ಜಿ ನಮೂನೆ0ಯ ಬೆರಳಚ್ಚು ಪ್ರತಿ/ಗಣಕೀಕೃತ ಪ್ರತಿಯಲ್ಲಿಯೇ ಅಭ್ಯಥಿಗಳು ತಮ್ಮ ಸ್ವ0ತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿ0ದ ಭರ್ತಿ ಮಾಡಿ ದಿನಾಂಕ 04.05.2013 ರಂದು ಸ0ಜೆ 5 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 04. 05 .2013 ರ ಸಂಜೆ 5.00 ಗಂಟೆ**

**ಅರ್ಜಿ ಸಲ್ಲಿಸಬೇಕಾದ ವಿಳಾಸ :**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ.

I. **ಹುದ್ದೆಯ ಪದನಾಮ : ಶೀಘ್ರಲಿಪಿಗಾರರು**

**ಖಾಲಿ ಹುದ್ದೆಗಳ ಸಂಖ್ಯೆ :** 06 (5 ಹಿಂಬಾಕಿ ಹುದ್ದೆಗಳು +1)

**ವೇತನ ಶ್ರೇಣಿ** : 14550-350-15600-400-17200-450-19000-500 21000-600-24600-700-26700 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು.

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಒಟ್ಟು |
|---|---|---|---|---|---|
| ಪರಿಶಿಷ್ಟ ಜಾತಿ | - | - | 1 | - | 1 |
| ಪರಿಶಿಷ್ಟ ಪಂಗಡ | 1 ( ಹಿಂಬಾಕಿ ಹುದ್ದೆ ) | - | - | - | 1 |
| ಪ್ರವರ್ಗ - II (ಎ) | - | 1 ( ಹಿಂಬಾಕಿ ಹುದ್ದೆ ) | - | - | 1 |
| ಪ್ರವರ್ಗ - II (ಬಿ) | 1 ( ಹಿಂಬಾಕಿ ಹುದ್ದೆ ) | - | - | - | 1 |
| ಸಾಮಾನ್ಯ ವರ್ಗ | - | - | 1 (ಹಿಂಬಾಕಿ ಹುದ್ದೆ) | 1 * (ಹಿಂಬಾಕಿ ಹುದ್ದೆ ) | 2 |
| **ಒಟ್ಟು** | **2** | **1** | **2** | **1** | **6** |

* ಚಲನವಲನ ವೈಕಲ್ಯವುಳ್ಳ ಅಂಗವಿಕಲ ಅಭ್ಯರ್ಥಿಗಳು

**ಶೈಕ್ಷಣಿಕ ವಿದ್ಯಾರ್ಹತೆ:**

1. ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ ( Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ ( Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ (Short Hand) ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಆಯ್ಕೆ ವಿಧಾನ :** ನಿಗದಿತ ಶೈಕ್ಷಣಿಕ ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 5 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**II. ಹುದ್ದೆಯ ಪದನಾಮ : ಬೆರಳಚ್ಚುಗಾರರು**

**ಖಾಲಿ ಹುದ್ದೆಗಳ ಸಂಖ್ಯೆ : 01**

**ವೇತನ ಶ್ರೇಣಿ :** 11600–200–12000–250–13000–300–14200–350–15600–400–17200–450–19000–500–21000 ಮತ್ತು ಲಭ್ಯವಿರುವ ಇತರೆ ಭತ್ಯೆಗಳು.

| ವರ್ಗೀಕರಣ | ಮಹಿಳಾ | ಒಟ್ಟು |
|---|---|---|
| ಸಾಮಾನ್ಯ ವರ್ಗ | 1 | 1 |

**ಶೈಕ್ಷಣಿಕ ವಿದ್ಯಾರ್ಹತೆ:**

1. ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ ( Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**ಆಯ್ಕೆ ವಿಧಾನ :**

ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:**

ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**III. ಹುದ್ದೆಯ ಪದನಾಮ : ಸೇವಕರು**

**ಖಾಲಿ ಹುದ್ದೆಗಳ ಸಂಖ್ಯೆ : 02**

ವೇತನ ಶ್ರೇಣಿ : 9600–200–12000–250–13000–300–14200–350–14550.

| ವರ್ಗೀಕರಣ | ಮಹಿಳಾ | ಗ್ರಾಮೀಣ | ಒಟ್ಟು |
|---|---|---|---|
| ಪರಿಶಿಷ್ಟ ಜಾತಿ | 1 | – | 1 |
| ಸಾಮಾನ್ಯ ವರ್ಗ | – | 1 | 1 |
| ಒಟ್ಟು | 1 | 1 | 2 |

**ಶೈಕ್ಷಣಿಕ ವಿದ್ಯಾರ್ಹತೆ:**

1. 7 ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.
2. ಕನ್ನಡ ಓದಲು ಹಾಗೂ ಬರೆಯಲು ತಿಳಿದಿರಬೇಕು.

**ಆಯ್ಕೆ ವಿಧಾನ :–**

ಮೇಲೆ ಹೇಳಿದ ಅರ್ಹತಾ ಪರೀಕ್ಷೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ 1:10 ರ ಅನುಪಾತದಲ್ಲಿ ಸಂದರ್ಶನಕ್ಕೆ ಕರೆಯಲಾಗುವುದು ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

ಮೇಲ್ಕಂಡ ಹುದ್ದೆಗಳನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) ನೇಮಕಾತಿ (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಾನುಸಾರ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ :** ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ವಯೋಮಿತಿ :**

1. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಈ ಕೆಳಕಂಡಂತೆ ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ಗರಿಷ್ಠ ವಯೋಮಿತಿ :**

| | |
|---|---|
| ಸಾಮಾನ್ಯ ವರ್ಗ | 35 ವರ್ಷ ಮೀರಿರಬಾರದು |
| ಪ್ರವರ್ಗ 2ಎ, 2ಬಿ, 3ಎ, 3ಬಿ | 38 ವರ್ಷ ಮೀರಿರಬಾರದು |
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ / ಪ್ರವರ್ಗ – 1 | 40 ವರ್ಷ ಮೀರಿರಬಾರದು |

2. ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ, ಅಂಗವಿಕಲರಿಗೆ ಹಾಗೂ ಜೀತ ಕಾರ್ಮಿಕರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದ್ದಲ್ಲಿ ಪ್ರಮಾಣಪತ್ರ ಸಲ್ಲಿಸಬೇಕು).
3. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗದ ಪ್ರತಿ ಸಲ್ಲಿಸಬೇಕು.
4. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ – 1, 2ಎ, 2ಬಿ, 3ಎ, 3ಬಿ, ಗಳ ಮೀಸಲಾತಿ ಪ್ರಮಾಣಪತ್ರಗಳನ್ನು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ ಸಲ್ಲಿಸಬೇಕು. (ಮೀಸಲಾತಿ ಕೋರಿದ್ದಲ್ಲಿ)
5. ಶಾಲಾ / ಕಾಲೇಜಿನ ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ತಮ್ಮ ಸಂಬಂಧಿಕರಲ್ಲದ ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳ ಇತ್ತೀಚಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು. (ಗಣ್ಯ ವ್ಯಕ್ತಿಗಳ ರುಜುವಿನಡಿಯಲ್ಲಿ ದಿನಾಂಕದೊಡನೆ ಹೆಸರು ಮತ್ತು ಮೊಹರು ಕಡ್ಡಾಯವಾಗಿ ಇರತಕ್ಕದ್ದು)
6. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಅಸುಇ/115/ಸೇನೆನಿ/ 2005 ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಸಲ್ಲಿಸಬೇಕು.
7. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ/96/ಸೇಸನಿ /2005, ದಿನಾಂಕ: 10.08.2005ರ ಪ್ರಕಾರ ನಿಗದಿತ ನಮೂನೆ – 2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರುಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
8. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2ರ ಜೊತೆ ನಮೂನೆ – 1ರಲ್ಲೂ ಸಹ ದೃಢೀಕರಣ ಪತ್ರವನ್ನು ಸಲ್ಲಿಸುವುದು.

**ಅಭ್ಯರ್ಥಿಗಳಿಗೆ ಸೂಚನೆ :**

1. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

2. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒ0ದೇ ಹುದ್ದೆಗೆ ವಿವಿಧ ಮೀಸಲಾತಿಯಡಿಗಳಲ್ಲಿ ಅರ್ಜಿ ಸಲ್ಲಿಸುವವರು ಪ್ರತ್ಯೇಕವಾಗಿ ಅರ್ಜಿಗಳನ್ನು ಹಾಗೂ ಆ ಅರ್ಜಿಗಳಲ್ಲಿ ಕಡ್ಡಾಯವಾಗಿ ಯಾವ ವರ್ಗ/ಮೀಸಲಾತಿಯಡಿಯಲ್ಲಿ ಅರ್ಜಿಗಳನ್ನು ಸಲ್ಲಿಸುತ್ತಿರುವಿರಿ ಎಂಬುದನ್ನು ಸ್ಪಷ್ಟವಾಗಿ ನಮೂದಿಸುವುದು.

3. ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

4. ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗತ್ತಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

5. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ಇತರೆ ಸೂಚನೆಗಳು :**

1. ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

2. ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3. ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

4. ಅರ್ಜಿದಾರರು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

5. ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5–00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟಾಂಪ್) ವನ್ನು ಹೊಂದಿರುವ ಸ್ವ – ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.

6. ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.

7. ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದು ಅರ್ಜಿಗಳನ್ನು ಅಂಚೆ ಮೂಲಕ ಸಲ್ಲಿಸುವುದು ಅಥವಾ ಖುದ್ದಾಗಿ ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.

8. ನೈತಿಕ ದುರ್ನಡತೆಯಿಂದಾಗಿ / ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ / ಕೇಂದ್ರ / ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ / ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ / ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.

9. ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆದ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುವುದು ಹಾಗೂ ಕಾನೂನಿನ ಕ್ರಮ ಜರುಗಿಸಲಾಗುವುದು.

10. ಅಭ್ಯರ್ಥಿಗಳ ಆಯ್ಕೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

11. ಪಿಂಚಣಿ ಸೌಲಭ್ಯ : ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ 31.03.2006 ರಂತೆ.

12. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಂಚೆ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

13. ಮೇಲ್ಕಂಡ ಹುದ್ದೆಗಳ ಸಂಖ್ಯೆ ಬದಲಾವಣೆಗೊಳ್ಳುವ ಸಂಭವವಿದೆ.

**ವಿ.ಜಿ. ಸಾವಡ್ಕರ್**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಾಮರಾಜನಗರ.

**ಅರ್ಜಿ ನಮೂನೆ**

EwÃa£ ¨Áªav
®Uw¹ »
ªiÁqÀªÀzÀ

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.
ಮಾನ್ಯರೇ,

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ: ಎಡಿಎಂಎನ್ /877/2013, ದಿನಾಂಕ 30.03.2013 ರ ಪ್ರಕಾರ ________ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1 | ಅಭ್ಯರ್ಥಿಯ ಹೆಸರು | |
| 2 | ತಂದೆಯ / ತಾಯಿಯ / ಗಂಡನ ಹೆಸರು | |
| 3 | ಪೂರ್ಣ ವಿಳಾಸ | |
| 4 | ದೂರವಾಣಿ ಸಂಖ್ಯೆ<br>(ಕಡ್ಡಾಯವಾಗಿ ನಮೂದಿಸುವುದು) | |
| 5 | ಜನ್ಮ ದಿನಾಂಕ ಮತ್ತು ವಯಸ್ಸು | |
| 6 | ಲಿಂಗ | ಪುರುಷ / ಮಹಿಳೆ |
| 7 | ವಿವಾಹಿತರಾಗಿದ್ದರೆ ಗಂಡನ ಅಥವ ಹೆಂಡತಿಯ ಹೆಸರು | |
| 8 | ಯಾವ ಮೀಸಲಾತಿಯಡಿಯಲ್ಲಿ ನೇಮಕಾತಿ ಅಪೇಕ್ಷಿಸುವಿರಿ | |
| 9 | ರಾಷ್ಟ್ರೀಯತೆ :<br>ಜಾತಿ / ಉಪಜಾತಿ : | |
| 10 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು : (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | |

| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
|---|---|---|---|---|---|
| ಎ | ಏಳನೇ ತರಗತಿ | | | | |
| ಬಿ | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | |
| ಸಿ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಇ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಎಫ್ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| ಜಿ | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |

| | | |
|---|---|---|
| 11 | ಜಾತಿ / ಅಂಗವಿಕಲ / ಗ್ರಾಮೀಣ ಮೀಸಲಾತಿ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರ ಲಗತ್ತಿಸಬೇಕು. | |
| 12 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಬೇಕು) | |
| 13 | ಸಲ್ಲಿಸಲು ಇಚ್ಛೆ ಪಡುವ ಇತರೆ ಯಾವುದಾದರೂ ವಿವರಗಳು | |

**ಸೂಚನೆ :** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು .

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ದನಿದ್ದೇನೆ / ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**PR.52**

**ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ ಕೊಡಗು ಜಿಲ್ಲೆ, ಮಡಿಕೇರಿ–571201**

**ಸಂ:ಸಿಬ್ಬಂದಿ(1)ಸಿಆರ್/7/10–11ದಿನಾಂಕ:19–03–2013**

**ಅಧಿಕೃತ ಜ್ಞಾಪನ**

**ವಿಷಯ:** ಕೊಡಗು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ವಿಚಾರ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ/299/ಬಿಎಸ್‌ಸಿ:2006 ದಿ:03–02–2009.
2. ಸರ್ಕಾರದ ಅಧಿಸೂಚನೆ ಸಂ:ಕಂಇ/299/ಬಿಎಸ್‌ಸಿ/2006 ದಿ:24–07–2009
3. ಸರ್ಕಾರದ ಪತ್ರ ಸಂ:ಆರ್‌ಡಿ/4/ಬಿಎಸ್‌ಸಿ/2011 ದಿ:25–02–2011
4. ಸರ್ಕಾರದ ಪತ್ರ ಸಂ:ಕಂಇ/33/ಡಿಎಸ್‌ಪಿ/2012 ದಿ:05–06–2011
5. ಈ ಕಚೇರಿ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:02–08–2012
6. ಈ ಕಚೇರಿ ಸಮಸಂಖ್ಯೆಯ ಅಧಿಸೂಚನೆ ದಿನಾಂಕ:17–09–2012
7. ಈ ಕಚೇರಿ ತಿಳುವಳಿಕೆ ಪತ್ರ ಸಮಸಂಖ್ಯೆ ದಿನಾಂಕ:05–10–2012

ಸರ್ಕಾರದ ಉಲ್ಲೇಖ (1) ರ ಅಧಿಸೂಚನೆಯನ್ವಯ ಕೊಡಗು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಲಾಗಿದೆ.

ಅದರಂತೆ, ಕರ್ನಾಟಕ ನಾಗರೀಕ ಸೇವೆ (Revenue Sub Ordinate Branch) (Cadre & Recruitment) (Amendment) ನಿಯಮಗಳು, 2009 ರಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆಯನ್ವಯ ಮೇಲ್ಕಂಡ ಖಾಲಿ ಹುದ್ದೆಗಳನ್ನು ಭರ್ತಿಗೊಳಿಸಲು ಉಲ್ಲೇಖ (5) ರ ಅಧಿಸೂಚನೆಯ ಮೂಲಕ ಅರ್ಹ ಅಭ್ಯರ್ಥಿಗಳಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಿ, ಸ್ವೀಕೃತಿಯಾದ ಅರ್ಜಿಗಳನ್ನು ಅರ್ಹತಾದಾಯಕ ವಿದ್ಯಾರ್ಹತೆಯಲ್ಲಿ ಗಳಿಸಿದ ಗರಿಷ್ಠ ಅಂಕಗಳ ಆಧಾರದಲ್ಲಿ ಸರ್ಕಾರ ನಿಗದಿಪಡಿಸಿದ ಮೀಸಲಾತಿ ರೋಸ್ಟರ್ ನಿಯಮದ ಪ್ರಕಾರ 1:5 ರ ಅನುಪಾತದಲ್ಲಿ ಮೀಸಲಾತಿ ಹಾಗೂ ಸಮತಳ

ಮೀಸಲಾತಿವಾರು ಕೊನೆಯ ಅಭ್ಯರ್ಥಿಯ ಶೇಕಡವಾರ ಅಂಕ ಮತ್ತು ಮೀಸಲಾತಿವಾರು ಅಭ್ಯರ್ಥಿಗಳ ದಿನಾಂಕ:17-09-2012 ರಂದು ಪ್ರಕಟಿಸಲಾಯಿತು ಹಾಗೂ ಈ ಪಟ್ಟಿಯ ಬಗ್ಗೆ ಆಕ್ಷೇಪಣೆ / ತಕರಾರು ಅರ್ಜಿಗಳನ್ನು ಸಲ್ಲಿಸಲು ದಿನಾಂಕ:25-09-2012 ರವರೆಗೆ ಕಾಲಾವಕಾಶವನ್ನು ನೀಡಲಾಯಿತು. ಸದರಿ ಅವಧಿಯಲ್ಲಿ ಯಾವುದೇ ಲಿಖಿತ ಆಕ್ಷೇಪಣೆಗಳು ಸ್ವೀಕೃತವಾಗದ ಕಾರಣ 1:5 ರ ಅನುಪಾತದಲ್ಲಿ ಪ್ರಕಟಿಸಿದ ಪಟ್ಟಿಯಂತೆ ದಿ:20-10-2012 ರಂದು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಯನ್ನು ನಡೆಸಲಾಯಿತು. ಪರಿಶೀಲನಾ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳು ಖುದ್ದು ಹಾಜರು ಪಡಿಸಿದ ಮೂಲ ದಾಖಲಾತಿಗಳನ್ನು ಪರಿಶೀಲಿಸಿ ಅಂತಿಮ ಆಯ್ಕೆ ಪಟ್ಟಿ ಮತ್ತು ಹೆಚ್ಚುವರಿ ಆಯ್ಕೆ ಪಟ್ಟಿಯನ್ನು ದಿನಾಂಕ:28-11-2012 ರಂದು ಪ್ರಕಟಿಸಲಾಯಿತು.

ಮುಂದುವರೆದು ಅಂತಿಮ ಆಯ್ಕೆ ಪಟ್ಟಿಯಲ್ಲಿದ್ದ ಅಭ್ಯರ್ಥಿಗಳ ಗುಣ ನಡತೆ, ವರ್ಗವಾರು ಮೀಸಲಾತಿ ಸಿಂಧುತ್ವವನ್ನು ಪರಿಶೀಲಿಸಿ ವರದಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ಪತ್ರ ಬರೆದು ವರದಿ ಪಡೆಯಲಾಗಿದೆ. ಅಂತಿಮ ಆಯ್ಕೆಪಟ್ಟಿಯಲ್ಲಿ ಯೋಜನಾ ನಿರಾಶ್ರಿತ ಮೀಸಲಾತಿಯಡಿ ಆಯ್ಕೆಯಾಗಿದ್ದ ಶ್ರೀ ರಮೇಶ್ ಬಿನ್.ಸಂಗಪ್ಪ ತುರದಗಿ, ಲಿಂಗಸುಗೂರು, ರಾಯಚೂರು ಜಿಲ್ಲೆ ಇವರು ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿಯಾಗಲು ಬಯಸುವುದಿಲ್ಲವೆಂದು ಸಂಬಂಧಪಟ್ಟ ಪೊಲೀಸ್ ವರಿಷ್ಠಾಧಿಕಾರಿಗಳ ಪರಿಶೀಲನಾ ವರದಿಯಲ್ಲಿ ತಿಳಿಸಿದ್ದರಿಂದ, ಅದೇ ಮೀಸಲಾತಿಯಡಿ ಹೆಚ್ಚುವರಿ ಆಯ್ಕೆ ಪಟ್ಟಿಯಲ್ಲಿದ್ದ ಶ್ರೀ ರಾಘವೇಂದ್ರ ಫಾಲ್ಕೆ ಬಿನ್.ತುಕರಾಂ, ಬಾಗಲಕೋಟೆ ಜಿಲ್ಲೆ ಇವರಿಗೆ ಗುಣನಡತೆ ಮತ್ತು ಸಿಂಧುತ್ವ ಪರಿಶೀಲನೆ ಕಳುಹಿಸಿದ್ದು, ವರದಿ ಸ್ವೀಕೃತವಾಗಿರುತ್ತದೆ.

ಆದ್ದರಿಂದ ಮೇಲ್ಕಂಡ ಅಂಶಗಳ ಅವಲೋಕನೇಯಂತೆ ಪೊಲೀಸ್ ಪರಿಶೀಲನಾ ವರದಿ ಮತ್ತು ಮೀಸಲಾತಿ ಸಿಂಧುತ್ವ ಪ್ರಮಾಣ ಪತ್ರ ಬಂದಿರುವ ಈ ಕೆಳಕಂಡ ಅಭ್ಯರ್ಥಿಯನ್ನು ಗ್ರಾಮ ಲೆಕ್ಕಾಧಿಕಾರಿಯ ಹುದ್ದೆಯ ರೂ.11600-200-12000-250-13000-300-14200-350-15600-400-17200-450-19000-500-21000 ವೇತನ ಶ್ರೇಣಿಯಲ್ಲಿ, ಅವರ ಹೆಸರಿನ ಎದುರು ನಮೂದಿಸಲ್ಪಟ್ಟ ಕಾರ್ಯಸ್ಥಳಕ್ಕೆ ಈ ಕೆಳಕಂಡ ನಿಬಂಧನೆಗಳಿಗನುಸಾರವಾಗಿ ನೇಮಕಾತಿಗೊಳಿಸಿ ಆದೇಶ ಹೊರಡಿಸಿದೆ.

| Sl. No. | Cand. Name | Address | Selected Under Group. | Appointed Place | Reporting Officer |
|---|---|---|---|---|---|
| 1 | SHWETHA H.K | D/o KRISHNA H.R GANDHINAGAR SOMWERPET KODAGU 571236 | SC (Women) | Nerugalale Circle Somwarpet Hobli | Tahsildar, Somwarpet Taluk |
| 2 | RAGHAVENDRA PHALAKE | S/o TUKARAM A/P ALGUR TQ/JAMKHANDI DIST/BAGALKOT BAGALKOT 587301 | GM (PDP) | Chennayyana kote Circle Ammathi Hobli | Tahsildar Virajpet Taluk |

ಅಭ್ಯರ್ಥಿಯು ಗ್ರಾಮೀಣ ಜನರ ಸೇವೆಗೆ ಕಂಕಣಬದ್ಧರಾಗಿ, ನಿಷ್ಠೆ, ಪ್ರಾಮಾಣಿಕತೆ ಹಾಗೂ ನಿಸ್ಪೃಹತೆಯಿಂದ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು:**

1. ಮೇಲ್ಕಂಡ ಅಭ್ಯರ್ಥಿಯು ದಿನಾಂಕ:03-04-2013 ರೊಳಗಾಗಿ ಸಂಬಂಧಿಸಿದ ತಹಶೀಲ್ದಾರ್‌ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು. ಈ ನೇಮಕವನ್ನು ಒಂದು ವೇಳೆ ತಿರಸ್ಕರಿಸಿದಲ್ಲಿ, 07 ದಿವಸಗಳೊಳಗಾಗಿ ಲಿಖಿತ ರೂಪದಲ್ಲಿ ಜಿಲ್ಲಾಧಿಕಾರಿಗಳ ಕಚೇರಿಗೆ ತಿಳಿಸತಕ್ಕದ್ದು.
2. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗಾಗಿ ಹಾಜರುಪಡಿಸಬೇಕು. 1) ಪಿ.ಯು.ಸಿ. ಅಂಕಪಟ್ಟಿ 2) ಎಸ್‌ಎಸ್‌ಎಲ್‌ಸಿ / ಹುಟ್ಟಿದ ದಿನಾಂಕದ ದೃಢೀಕರಣ 3) ಶಾಲಾ ವರ್ಗಾವಣೆ ಪ್ರಮಾಣ ಪತ್ರ 4) ವೈದ್ಯಕೀಯ ಪ್ರಮಾಣ ಪತ್ರ 5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರಗಳು (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ)
3. ಅಭ್ಯರ್ಥಿಯು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೊಬೇಷನರಿ) ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು 1) ಅಕೌಂಟ್ಸ್ ಲೋಯರ್ 2) ರೆವಿನ್ಯೂ ಲೋಯರ್ 3) ಕನ್ನಡ ಭಾಷಾ ಪರೀಕ್ಷೆ (ಎಸ್.ಎಸ್.ಎಲ್.ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ ಕನ್ನಡ ಭಾಷಾ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು) ಈ ಅವಧಿಯಲ್ಲಿ ನಿಗಧಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದು.
4. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲಾಗುವುದು.

5. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಾತ್ಮಕವಾಗಿ ಗೊತ್ತುಪಡಿಸಿದ ನಮೂನೆಯಲ್ಲಿ ವಚನ ಸ್ವೀಕಾರ ಮಾಡತಕ್ಕದ್ದು.

6. ಅಭ್ಯರ್ಥಿಯು ಸರ್ಕಾರದ ಆದೇಶ ಸಂ:ಎಫ್‌ಡಿ (ಎಸ್‌ಪಿಎಲ್) 04/ಪಿಇಟಿ/2005 ದಿನಾಂಕ:31–03–2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.

7. ಸರ್ಕಾರದ ಸುತ್ತೋಲೆ ಸಂ:ಕಂಇ/54/ಬಿಎಸ್‌ಸಿ/2007 ದಿನಾಂಕ:27–03–2007 ರನ್ವಯ ಅಂತರ್ ಜಿಲ್ಲಾ ವರ್ಗಾವಣೆಗೆ ಕೊಡಗು ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 5 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

8. ಅಭ್ಯರ್ಥಿಯು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.

9. ಅಭ್ಯರ್ಥಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಕಾಲ ಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

10. ಅಭ್ಯರ್ಥಿಯ ಜೇಷ್ಠತೆಯು ನೇರ ನೇಮಕಾತಿ ಪ್ರಾಧಿಕಾರದ ಆಯ್ಕೆ ಪಟ್ಟಿಯಲ್ಲಿ ಪ್ರಸ್ತುತ ಇದ್ದಂತೆಯೇ ಇರತಕ್ಕದ್ದು. ಹಾಗೂ ತದನಂತರ ಈ ಸಂಬಂಧ ಸರ್ಕಾರ ಹೊರಡಿಸುವ ಅಧಿಸೂಚನೆ/ಕಾನೂನು ತಿದ್ದುಪಡಿಗೆ ಒಳಪಡುತ್ತದೆ.

11. ಗ್ರಾಮ ಲೆಕ್ಕಿಗ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ, ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

12. ಅಭ್ಯರ್ಥಿಯು ಇಲಾಖೆಯಿಂದ ಕಾಲ ಕಾಲಕ್ಕೆ ನಿಗಧಿಪಡಿಸಿದ ಹಾಗೂ ನಿಗಧಿಪಡಿಸಲಾಗುವ ವಿವಿಧ ಪರೀಕ್ಷೆ / ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

14. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

15. ಆಯ್ಕೆಯಾಗಿರುವ ಅಭ್ಯರ್ಥಿಯು ಅವರನ್ನು ನೇಮಿಸಿರುವ ಸ್ಥಳದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು. ಈ ಬಗ್ಗೆ ಒಂದು ಪ್ರಮಾಣ ಪತ್ರವನ್ನು (ನಮೂನೆಯಂತೆ) ನೋಟರಿಯವರಿಂದ ಪ್ರಮಾಣೀಕರಿಸಿ ಹಾಜರುಪಡಿಸಬೇಕು.

**ಡಾ:ಎನ್.ವಿ.ಪ್ರಸಾದ್**
ಅಧ್ಯಕ್ಷರು,
ಗ್ರಾಮಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ ಮತ್ತು
ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.

PR.47

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು